# ಇಂಗ್ಲೀಶ್ ತರಗತಿಗಳಲ್ಲಿ ಸಂವಾದವನ್ನು ಹುಟ್ಟಿಸುವುದು

**ಕೆ. ಎನ್ ಆನಂದನ್**

**ಪೀಠಿಕೆ**

ನಮ್ಮ ದೇಶದಲ್ಲಿ ಶಿಕ್ಷಣದ ಗುಣಮಟ್ಟವನ್ನು ಕುರಿತ ಚರ್ಚೆ ನಡೆದಾಗಲೆಲ್ಲ, ಅದು ಪ್ರಾಥಮಿಕ, ಮಾಧ್ಯಮಿಕ ಅಥವಾ ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣ -ಹೀಗೆ ಯಾವುದೇ ಮಟ್ಟದ ಶಿಕ್ಷಣದ ಗುಣಮಟ್ಟವನ್ನು ಕುರಿತು ಇರಲಿ, ಅಲ್ಲಿ ಇಂಗ್ಲೀಶ್ ಭಾಷಾ ಬೋಧನೆ ಮತ್ತು ಕಲಿಕೆಯ ಕಳಪೆ ಗುಣಮಟ್ಟದ ಬಗೆಗಿನ ವಿಷಯವು ಚರ್ಚೆಯ ಕೇಂದ್ರವಸ್ತುವಾಗಿರುತ್ತದೆ. 10-12 ವರ್ಷಗಳಷ್ಟು ದೀರ್ಘಕಾಲದವರೆಗೆ ಇಂಗ್ಲೀಶನ್ನು ಕಲಿತು ತಮ್ಮ ಶಾಲೆ ಅಥವಾ ಕಾಲೇಜು ಶಿಕ್ಷಣವನ್ನು ಪೂರೈಸಿದ ಮೇಲೆಯೂ ಹೆಚ್ಚಿನ ವಿದ್ಯಾರ್ಥಿಗಳು ದೋಷಪೂರಿತ ಭಾಷಾ ಸಾಮಗ್ರಿಗಳನ್ನು ಹೊಂದಿರುತ್ತಾರೆ. ಅದು ನಂತರ ಅವರ ಎಲ್ಲಾ ಶೈಕ್ಷಣಿಕ ಮತ್ತು ವೃತ್ತಿಜೀವನದ ಸಾಧನೆಗಳಿಗೆ ಒಂದು ಅಡ್ಡಿಯಾಗಿ ಪರಿಣಮಿಸುತ್ತದೆ.

ಇದು ಯಾಕೆ ಹೀಗಾಗುತ್ತದೆ? ಇದಕ್ಕೆ ಕಲಿಕಾರ್ಥಿಗಳನ್ನು ದೂಷಿಸಿ ಪ್ರಯೋಜನವಿಲ್ಲ, ಅಥವಾ ಬೋಧಕರನ್ನು ದೂಷಿಸುವುದರಲ್ಲಿಯೂ ಅರ್ಥವಿಲ್ಲ. ಕಲಿಕಾರ್ಥಿಗಳು ಬಹಳ ವರ್ಷಗಳವರೆಗೆ ಇಂಗ್ಲೀಶನ್ನು ಕಲಿತರೂ ಅವರು ಕಲಿಯುವುದು ಭಾಷೆಯನ್ನಲ್ಲ, ಬದಲಿಗೆ ಒಂದಿಷ್ಟು ಶಬ್ದಭಂಡಾರ, ಸಂರಚನೆಗಳು, ಬಳಕೆಗಳು ಮತ್ತು ದೊಡ್ಡ ಪ್ರಮಾಣದಲ್ಲಿ ಪ್ರಶ್ನೆಗಳು, ಮತ್ತದರ ಉತ್ತರಗಳನ್ನು ಒಳಗೊಂಡ ಭಾಷೆಗೆ ಸಂಬಂಧಿಸಿದ ಸಂಗತಿಗಳ ಒಂದು ಮೂಟೆಯನ್ನು ಹೊತ್ತು ಹೊರಬರುತ್ತಾರೆ. ಅಂಚೆಯವನು ಪತ್ರಗಳನ್ನು ಅವರವರ ವಿಳಾಸಕ್ಕೆ ವಿತರಿಸುವ ಹಾಗೆ ಬೋಧಕರು ಪಾಠಗಳನ್ನು ಮಕ್ಕಳಿಗೆ 'ವಿತರಿಸುತ್ತಾರೆ' ಅಷ್ಟೇ. ಅಂಚೆಯವನು ಪತ್ರಗಳಲ್ಲಿರುವುದನ್ನು ಓದಿ, ಅದರೊಳಗಿನದ್ದನ್ನು ವ್ಯಾಖ್ಯಾನಿಸಿ ಅದರ ಮೇಲೆ ತನ್ನ ಹೊಳಹುಗಳನ್ನು ಕೊಡುವ ಹಾಗಿಲ್ಲ; ಹಾಗೆ ಮಾಡಿದರೆ ಅದು ಆತನ ವೃತ್ತಿಧರ್ಮಕ್ಕೆ ದ್ರೋಹ ಬಗೆದಂತೆ. ಅದಕ್ಕೆ ಪ್ರತಿಯಾಗಿ ಪತ್ರವನ್ನು ಸ್ವೀಕರಿಸಿದವರು ಸಹಾ ತಾವು ಸ್ವೀಕರಿಸಿದ ಪತ್ರಗಳ ಬಗೆಗೆ ತಮ್ಮ ಅಭಿಪ್ರಾಯವೇನು ಎನ್ನುವುದನ್ನು ಅಂಚೆಯವನಿಗೆ ಹೇಳುವುದಿಲ್ಲ. ಅದೇ ರೀತಿ, ಪಠ್ಯದೊಳಗಿನ ಅಂಶಗಳನ್ನು ಕಲಿಕಾರ್ಥಿಗಳಿಗೆ ವಿತರಿಸಲಾಗುತ್ತದೆ, ಅವರು ಆ ವಿವರಗಳನ್ನು ನೆನಪಿನಲ್ಲಿಟ್ಟುಕೊಂಡು ಪರೀಕ್ಷೆಯ

ಹೊತ್ತಿಗೆ ಅವೆಲ್ಲವನ್ನು ಪುನರುತ್ಪಾದಿಸಬೇಕು. ಯಾವ ಹಂತದಲ್ಲಿಯೂ ತಮ್ಮ ಆಲೋಚನೆಗಳನ್ನು, ಭಾವನೆಗಳನ್ನು ಅಥವಾ ತಮಗೆ ವಿತರಿಸಲಾದ ವಿವರಗಳ ಮೇಲೆ ತಮ್ಮ ಹೊಳಹುಗಳನ್ನು ವ್ಯಕ್ತಪಡಿಸಲು ಕಲಿಕಾರ್ಥಿಗಳನ್ನು ಕೇಳುವುದಿಲ್ಲ; ಅವರ ಇಡೀ ಶೈಕ್ಷಣಿಕ ಬದುಕಿನಲ್ಲಿ ಭಾಷೆಯನ್ನು ಉತ್ಪಾದಿಸಿ ಎಂದು ಅವರನ್ನು ಕೇಳಲಾಗುವುದಿಲ್ಲ. ಪರಿಸ್ಥಿತಿ ಹೀಗಿರುವಾಗ ಅವರ ಇಂಗ್ಲೀಶ್ ಸರಿ ಇಲ್ಲ, ಅಥವಾ ಅವರಿಗೆ ಸಂವಹನದ ಕೌಶಲಗಳು ಗೊತ್ತಿಲ್ಲ ಎಂದು ಗೊಣಗಾಡುವುದು ನೀತಿಗೆ ವಿರುದ್ಧವಾಗುತ್ತದೆ. ಭಾಷೆಯನ್ನು ಕಲಿಯುವುದೆಂದರೆ ನೂರಾರು ಪ್ರಶ್ನೆಗಳು ಮತ್ತು ಉತ್ತರಗಳನ್ನು ಕಲಿಯುವುದು ಎಂದಲ್ಲ, ಅಥವಾ ವ್ಯಾಕರಣ ಮತ್ತು ಶಬ್ದಭಂಡಾರದ ಅಭ್ಯಾಸಗಳನ್ನು ಮಾಡುವುದು ಎಂದಲ್ಲ ಎಂದು ಭಾಷೆಯ ಬಗೆಗೆ ತಿಳುವಳಿಕೆ ಇರುವ ಯಾರೇ ಆದರೂ ಒಪ್ಪಿಕೊಳ್ಳುತ್ತಾರೆ. ಇಂಗ್ಲೀಶ್ ತರಗತಿಗಳಲ್ಲಿ ಕಲಿಕೆಯ ಸಂದರ್ಭದಲ್ಲಿ ಬೋಧಕರು ಮತ್ತು ಕಲಿಕಾರ್ಥಿಗಳು ಪಡುವ ಯಾತನೆಗಳ ಬಗೆಗೆ ನಮಗೆ ಗೊತ್ತು. ಆದರೆ ತರಗತಿಗಳಲ್ಲಿ ನಾವು ಈಗೇನು ಮಾಡುತ್ತಿದ್ದೇವೆಯೋ ಅದು, ಭಾಷಾ ಬೋಧನೆ ಎಂಬ ನೆಪದಲ್ಲಿ ಒಂದಿಷ್ಟು ಹಳಸಿದ ಇಂಗ್ಲೀಶ್ ಶಬ್ದಗಳು ಮತ್ತು ವಾಕ್ಯಗಳನ್ನು ಕಲಿಸುವ ಮತ್ತು ಕಲಿಯುವ, ಈ ಹೇವರಿಕೆ ಬರುವಷ್ಟು ನಿರುತ್ಸಾಹಕರವಾದ ಚಾಕರಿಯಿಂದ ಅವರನ್ನು ನಿರಾಳಗೊಳಿಸಲು ಏನೇನೂ ಸಹಾಯ ಮಾಡುತ್ತಿಲ್ಲ. ಇದು ಯಾಕೆ ಹೀಗೆ ಎನ್ನುವುದನ್ನು ನಾವೀಗ ಪರಿಶೀಲಿಸೋಣ.

**ಸಹಜ ಭಾಷಾ ಶಕ್ತಿ**

ನಮ್ಮ ದೇಶದ ಇಂಗ್ಲೀಶ್ ಭಾಷಾ ಬೋಧನೆಯಲ್ಲಿ (ELT) ಇಂಗ್ಲೀಷ್ ಭಾಷಿಕ ಸಮುದಾಯದ ಉಪಸ್ಥಿತಿಯ ಕೊರತೆ, ಅಥವಾ ಇಂಗ್ಲೀಶಿಗೆ ಒಡ್ಡಿಕೊಳ್ಳುವುದರಲ್ಲಿರುವ ಕೊರತೆಯಂತಹ ಸಾಮಾನ್ಯ ಸಮಸ್ಯೆಗಳ ಹೊರತಾಗಿ ಮೂಲ ಸ್ವರೂಪದ ಸಮಸ್ಯೆಯೊಂದು ಇದೆ. ಅದು ಒಟ್ಟಾರೆಯಾಗಿ ಮಗುವಿನಲ್ಲಿ ಸಹಜವಾಗಿಯೇ ಅಂತಸ್ಥವಾಗಿರುವ ಭಾಷಾ ವ್ಯವಸ್ಥೆಯನ್ನು ನಿರ್ಲಕ್ಷ್ಯ ಮಾಡುತ್ತದೆ. ಮಗುವಿನ ಮನಸ್ಸು ಒಂದು ಖಾಲಿ ಪಾತ್ರೆಯಾಗಿರುತ್ತದೆ ಮತ್ತು ಭಾಷೆಗೆ ಸಂಬಂಧಪಟ್ಟ ವಿವರಗಳೆಲ್ಲವೂ ಹೊರಗಿನಿಂದ ಬಂದು ಒಳಸೇರುತ್ತವೆ ಎನ್ನುವ ವರ್ತನಾವಾದಿ ಊಹೆಯನ್ನು ಆಧರಿಸಿ ಬೋಧನಾ ಸಾಮಗ್ರಿಗಳು ಮತ್ತು ಕ್ರಮಗಳನ್ನು ತಯಾರಿಸಲಾಗುತ್ತದೆ. ೧೯೬೦ರ ದಶಕದ ಸಂಜ್ಞಾನಾತ್ಮಕ ಕ್ರಾಂತಿಯ ದೆಸೆಯಿಂದ ಜಗತ್ತಿನಾದ್ಯಂತ ದ್ವಿತೀಯ ಭಾಷೆಯ ಕಲಿಕೆಗೆ ಸಹಾಯ ಮಾಡುವ ಅನೇಕ ಹೊಸ ವಿಧಾನಗಳು ವಿಕಾಸ ಹೊಂದಿವೆ. ಇದರ ಹೊರತಾಗಿಯೂ ಸಂಜ್ಞಾನಾತ್ಮಕ ಮನೋವಿಜ್ಞಾನ, ಸೈದ್ಧಾಂತಿಕ ಭಾಷಾವಿಜ್ಞಾನ ಮತ್ತು

ವಿಮರ್ಶಾತ್ಮಕ ಬೋಧನಾಕ್ರಮಗಳಲ್ಲಿನ ಹೊಸ ಹೊಳಹುಗಳು ನಮ್ಮ ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರತಿಫಲಿಸುತ್ತಿಲ್ಲ.

ಭಾಷಾ ಬೋಧನೆಯ ಇವತ್ತಿನ ಮಾದರಿಯು ಮೂಲತಃ ಅಪೂರ್ಣವಾದುದು, ಅದು ಸಂವಾದದ ಮಟ್ಟದಲ್ಲಿ ನಡೆಯುವ ಕೊಡುಕೊಳ್ಳುವಿಕೆಯನ್ನು ಪೂರ್ತಿಯಾಗಿ ಕಡೆಗಣಿಸುತ್ತದೆ ಮತ್ತು ಪ್ರತ್ಯೇಕ ಭಾಷಾ ಘಟಕಗಳನ್ನು ವಿದ್ಯಾರ್ಥಿಗಳಿಗೆ ರವಾನಿಸುವುದಷ್ಟಕ್ಕೆ ಮಾತ್ರ ತನ್ನನ್ನು ಸೀಮಿತಗೊಳಿಸಿಕೊಂಡಿದೆ. ಆದರೆ ಒಂದು ಶಬ್ದ ಅಥವಾ ಒಂದು ವಾಕ್ಯವು ಕೂಡಾ ಪ್ರತ್ಯೇಕವಾಗಿ ತನ್ನದೇ ಆದ ಒಂದು ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವುದಿಲ್ಲ, ಏಕೆಂದರೆ ಈ ಘಟಕಗಳು ಒಂದು ಸಂವಾದದ ಒಳಗೆ ಕಾರ್ಯ ನಿರ್ವಹಿಸುತ್ತವೆ. 'ಸಂರಚನೆಯ ಬಗೆಗಿನ ಪ್ರಜ್ಞೆ'ಯನ್ನು ಹೊಂದುವ ಮೂಲಕ ಭಾಷಾರ್ಜನೆ ನಡೆಯುತ್ತದೆ. ಇದನ್ನು ಧ್ವನಿಯ ಸ್ವರೂಪದ ಮಟ್ಟದಲ್ಲಿ, ಶಬ್ದ ರಚನೆ ಮತ್ತು ವಾಕ್ಯ ರಚನೆಯ ಮಟ್ಟದಲ್ಲಿ ಭಾಷಾ ಘಟಕಗಳ ಪುನರಾವರ್ತನೆಯಾಗುವಂತೆ ನೋಡಿಕೊಳ್ಳುವ ಹಾಗೂ ಆ ಮೂಲಕ ಭಾಷಾ ಅನುಭವವು ನಿರಂತರವಾಗಿ ನಡೆಯುತ್ತಿರುವಂತೆ ನೋಡಿಕೊಳ್ಳುವ ಒಂದು ಅರ್ಥಪೂರ್ಣವಾದ, ಅಗತ್ಯಕ್ಕೆ ತಕ್ಕ ಭಾಷಾ ಸಂವಾದದ ಮೂಲಕವೇ ಸಾಧಿಸಬಹುದು.

ಇದೆಲ್ಲಕ್ಕಿಂತ ಹೆಚ್ಚಾಗಿ, ದೇಶದೆಲ್ಲೆಡೆ ರೂಢಿಯಲ್ಲಿರುವ ವಿಮರ್ಶಾ ರಹಿತ ಇಂಗ್ಲೀಷ್ ಭಾಷಾ ಬೋಧನೆಯು ನಮ್ಮ ರಾಷ್ಟ್ರವನ್ನು ಭಾಷಾ ಸಾಮ್ರಾಜ್ಯಶಾಹಿಯ ಸಂಕೋಲೆಯೊಳಗೆ ಸಿಲುಕಿಸುತ್ತದೆ. ನಾವೇ ನೋಡುವಂತೆ ಇಂಗ್ಲೀಶ್ ಮಾಧ್ಯಮ ಶಾಲೆಗಳ ಮೇಲಿನ ಒಲವು ಹೆಚ್ಚುತ್ತಲೇ ಇರುವುದು, ಅಂಗೀಕೃತ ಇಂಗ್ಲೀಷಿನ ಮೇಲಿನ ವ್ಯಾಮೋಹ, ಮಾರುಕಟ್ಟೆಯ ಸೆಳವಿನಿಂದ ರೂಪಿಸಲ್ಪಟ್ಟ ಸೀಮಿತ ಚೌಕಟ್ಟಿನ ಪ್ಯಾಕೇಜುಗಳ ಮೇಲೆ ವಿವೇಕಶೂನ್ಯವಾಗಿ ಅವಲಂಬಿತರಾಗುವುದು, ಇಂಗ್ಲೀಶನ್ನು ಕಲಿಸಲು ಇಂಗ್ಲೀಶ್ ಮೂಲ ಭಾಷೆಯಾಗಿರುವವರನ್ನು ನೇಮಿಸುವುದು ಮತ್ತು ಈ ರೀತಿಯ ಇನ್ನೂ ಹಲವು ಸಂಗತಿಗಳಲ್ಲಿ ಅದು ವ್ಯಕ್ತವಾಗುತ್ತದೆ.

ಈ ಹಿನ್ನೆಲೆಯಲ್ಲಿಯೇ ನಾನು ಕೇರಳ ಮತ್ತು ವಿಭಜನೆಗೂ ಮುಂಚಿನ ಆಂಧ್ರಪ್ರದೇಶ ರಾಜ್ಯಗಳಿಗಾಗಿ ಸಂವಾದಾತ್ಮಕ ಬೋಧನಾ ಕ್ರಮವನ್ನು (ಡಿಸ್ಕೋರ್ಸ್ ಓರಿಯೆಂಟೆಡ್ ಪೆಡಗಾಜಿ, DOP) ವಿನ್ಯಾಸಗೊಳಿಸಿದೆ. ಭಾಷೆಯು ಸಂವಾದದ ರೂಪದಲ್ಲಿ ಉಳಿದುಕೊಳ್ಳುತ್ತದೆ, ಪ್ರತ್ಯೇಕ ಧ್ವನಿಗಳು, ಶಬ್ದಗಳು ಅಥವಾ ವಾಕ್ಯಗಳ ರೂಪದಲ್ಲಲ್ಲ ಎಂಬ ಊಹೆಯನ್ನು ಈ ಬೋಧನಾ ಕ್ರಮವು ಆಧಾರವಾಗಿಟ್ಟುಕೊಳ್ಳುತ್ತದೆ. ಈ ಬೋಧನಾ ಕ್ರಮವು ಭಾಷೆಯೆಂದರೆ ಏನು ಮತ್ತು

ಅದನ್ನು ಹೇಗೆ ಅರ್ಜಿಸಿಕೊಳ್ಳುವುದು ಎಂಬ ಸದ್ಯ ಚಲಾವಣೆಯಲ್ಲಿರುವ ತಿಳುವಳಿಕೆಯಿಂದ ಪ್ರಚೋದಿತವಾಗಿದೆ.

**ಸಂವಾದಾತ್ಮಕ ಬೋಧನಾ ಕ್ರಮದ ಪಕ್ಷಿ ನೋಟ**

ಸಂವಾದಾತ್ಮಕ ಬೋಧನಾ ಕ್ರಮದ (DOP) ವಿಶಿಷ್ಟ ಲಕ್ಷಣಗಳನ್ನು ಹೀಗೆ ಸಾರಾಂಶೀಕರಿಸಬಹುದು:

ಸಂವಾದಗಳು ಮತ್ತು ವಿಷಯವಸ್ತುಗಳು ಹೆಚ್ಚುತ್ತ ಹೋದಂತೆ ಕಲಿಕಾರ್ಥಿಗಳು ಒಂದು ಸಮೃದ್ಧವಾದ ಭಾಷಿಕ ಅನುಭವವನ್ನು ಪಡೆಯುತ್ತಾರೆ. ಇಲ್ಲಿ ಒಂದೆಡೆ, ಕಲಿಕಾರ್ಥಿಗಳು ಭಾಷಿಕ ಸ್ವೀಕೃತಿ ಮತ್ತು ಉತ್ಪನ್ನಗಳು ಒಂದೇ ವಿಷಯವಸ್ತುವಿನ ಪುನರಾವರ್ತನೆಯೊಂದಿಗೆ (ಉದಾಹರಣೆಗೆ, ಅಂಚಿಗೆ ತಳ್ಳಲ್ಪಡುವುದು) ಕತೆ, ಕವನ, ಪ್ರಬಂಧ, ನಾಟಕ ಹೀಗೆ ವೈವಿಧ್ಯಮಯ ಸಂವಾದದ ಪ್ರಕಾರಗಳನ್ನು ಒಳಗೊಳ್ಳುತ್ತವೆ. ಇನ್ನೊಂದೆಡೆ, ಕಲಿಕಾರ್ಥಿಗಳು ಬೇರೆ ಬೇರೆ ವಿಷಯವಸ್ತುಗಳೊಂದಿಗೆ ಒಂದೇ ಸಂವಾದ (ಉದಾಹರಣೆಗೆ, ಸಂಭಾಷಣೆ) ಪ್ರಕಾರಕ್ಕೆ ಒಡ್ಡಿಕೊಳ್ಳುತ್ತಾರೆ.

ತರಗತಿ ಕೋಣೆಯನ್ನು ನಿರ್ವಹಿಸುವಾಗ ಈ ಎಲ್ಲಾ ಹಂತಗಳಲ್ಲಿಯೂ ಭಾಷೆಯೊಳಗೆ ಸೇರುವ ವಿವರಗಳು ಕಲಿಕಾರ್ಥಿಗಳಿಗೆ ಗ್ರಹಿಸಲು ಸಾಧ್ಯವಾಗುವಂತಿರಬೇಕು ಎನ್ನುವುದು ಮುಖ್ಯ ಕಾಳಜಿಯಾಗಿರಬೇಕು, ಆವಾಗ ಅವರು ಅದನ್ನು ಗ್ರಹಿಸಿದರೆ ಇಲ್ಲವೆ ಎಂಬುದನ್ನು ಪರಿಶೀಲಿಸುವ ಅವಶ್ಯಕತೆ ಇರುವುದಿಲ್ಲ. ಗ್ರಹಿಕೆಯು ಪ್ರತಿಯೊಬ್ಬ ಕಲಿಕಾರ್ಥಿಯ ಮನಸ್ಸಿನೊಳಗೆ ನಡೆಯುವ ಪ್ರಕ್ರಿಯೆ -ಸಂವಾದದ ಹಿನ್ನೆಲೆ, ಕಲಿಕಾರ್ಥಿಯ ಮನಸ್ಸಿನಲ್ಲಿ ಪ್ರಚೋದಿತವಾದ ಸಂವಹನಾತ್ಮಕ ನಿರೀಕ್ಷೆಗಳು, ಪರಿಚಿತ ಶಬ್ದಗಳು, ಕಥನಗಳ ಮೂಲಕ ಸೃಷ್ಟಿಸಲ್ಪಟ್ಟ ಚಿತ್ರಣಗಳು, ಮಾತುಕತೆಗಳ ಮೂಲಕ ಆದ ಬ್ರೇನ್ ಸ್ಟಾರ್ಮಿಂಗ್ [ಗುಂಪುಚರ್ಚೆಯ ಮೂಲಕ ವಿಚಾರಮಂಥನ], ಮಾತಿನ ಲಯಗತಿಗಳು, ಸುಗಮಕಾರರು ಬಳಸಿದ ಹಾವಭಾವ, ಮೌಖಿಕ ಅಭಿವ್ಯಕ್ತಿಗಳು, ಪದಸಂಕೇತಗಳ ಬದಲಾವಣೆ, ಸಹಪಾಠಿಗಳೊಂದಿಗೆ ಸಹಭಾಗಿತ್ವ ಹೀಗೆ ಈ ರೀತಿಯ ಅನೇಕ ಅಂಶಗಳ ಪರಸ್ಪರ ಪ್ರಭಾವದಿಂದ ನಡೆಯುವ ಪ್ರಕ್ರಿಯೆ ಎಂದು DOP ಭಾವಿಸುತ್ತದೆ.

DOP ಬೋಧನಾ ಕ್ರಮವು ವಿವಿಧ ರೀತಿಯ ಸಂವಾದ ಪ್ರಕಾರಗಳ ಅನುಭವ ಪಡೆದುಕೊಳ್ಳುವ ಮತ್ತು ವಿವಿಧ ಉದ್ದೇಶಗಳಿಗಾಗಿ, ವಿವಿಧ ಓದುಗರ ಸಲುವಾಗಿ ಮಾಡುವ ಬರವಣಿಗೆಯ

ಪ್ರಕ್ರಿಯೆಯಲ್ಲಿ ಕಲಿಕಾರ್ಥಿಗಳಿಗೆ ಬೇಕಾಗುವ ಕೌಶಲಗಳನ್ನು ಬೆಳೆಸಿಕೊಳ್ಳಲು ಸಹಾ ನೆರವಾಗುತ್ತದೆ. ಈ ಕೌಶಲಗಳನ್ನು ಅವುಗಳ ಬಳಕೆಯಿಂದ ಪ್ರತ್ಯೇಕಿಸಿ ಅಥವಾ ಕೃತಕವಾಗಿ ರೂಪಿಸಿಕೊಂಡ ಕೌಶಲಗಳ ಪಾಠಗಳ ಮೂಲಕವೂ ಕಲಿಸಲಾಗುವುದಿಲ್ಲ. ಯಾರೂ ಅಕಾರಾದಿ ಭಾಷೆಯನ್ನು ಧ್ವನಿಗಳು ಮತ್ತು ಅವುಗಳ ಸಂಕೇತಗಳ ನಡುವಿನ ಸಂಬಂಧಗಳನ್ನು ಪರಿಗಣಿಸದೇ ಓದಲಾಗುವುದಿಲ್ಲ. ತರಗತಿ ಕೋಣೆಯಲ್ಲಿ ಏನನ್ನು ಓದಲಾಗುತ್ತದೆ ಅಥವಾ ಕೇಳಲಾಗುತ್ತದೆ ಎನ್ನುವುದನ್ನು ಊಹಿಸಲು ಕಲಿಕಾರ್ಥಿಗೆ ಹಲವು ಸೂಚನೆಗಳು ಕೂಡಾ ಲಭ್ಯವಿರುತ್ತವೆ. ಲಭ್ಯವಿರುವ ಎಲ್ಲಾ ಸೂಚನೆಗಳನ್ನು ಹೇಗೆ ಬಳಸಬೇಕೆಂದು ಕಲಿಯಲು ಬೋಧಕರು ಮಕ್ಕಳಿಗೆ ಸಹಾಯ ಮಾಡಬೇಕು.

DOP ಬೋಧನಾ ಕ್ರಮವು ಸಮಗ್ರ ಭಾಷಾ ತತ್ವಶಾಸ್ತ್ರವನ್ನು ಪಾಲಿಸುತ್ತದೆ. ಒಂದು ಸಮಗ್ರ ಭಾಷಾ ದೃಷ್ಟಿಕೋನಕ್ಕೆ ಆಸರೆಯಾಗಿ ಅಲ್ಲಿ ಬೌದ್ಧಿಕ ಮನೋವಿಜ್ಞಾನ ಮತ್ತು ಸಿದ್ಧಾಂತದ ಕಲಿಕೆ, ಮನೋವೈಜ್ಞಾನಿಕ ಭಾಷಾವಿಜ್ಞಾನ ಮತ್ತು ಸಾಮಾಜಿಕ ಭಾಷಾವಿಜ್ಞಾನ, ಭಾಷಾರ್ಜನೆ ಮತ್ತು ನವೋದಿತ ಸಾಕ್ಷರತೆ, ಹಾಗೂ ಶಿಕ್ಷಣ ರಂಗದಿಂದಲೂ ಹೊರಹೊಮ್ಮುತ್ತಿರುವ ಸಂಶೋಧನಾತ್ಮಕ ಅಧ್ಯಯನಗಳ ಒಂದು ಸುಭದ್ರ ಅಡಿಪಾಯವು ಇದೆ. ಸಂಶೋಧಕರು ಕಂಡುಕೊಂಡ ಹಾಗೆ ಸಮಗ್ರ ಭಾಷಾ ಕಲಿಕೆ ಅಥವಾ ಬೋಧನೆಯು ಸಾಂಪ್ರದಾಯಿಕ ಮಾರ್ಗಗಳಿಗಿಂತ ಹೆಚ್ಚು ವಿಶಾಲ ವ್ಯಾಪ್ತಿಯ ಸಾಹಿತ್ಯಿಕ ಧೋರಣೆಗಳು, ಸಾಮರ್ಥ್ಯಗಳು ಮತ್ತು ವರ್ತನೆಗಳನ್ನು ಪೋಷಿಸುತ್ತದೆ. ಈ ಕ್ರಮದಲ್ಲಿ ಪ್ರಕ್ರಿಯೆಯು ಕೇಂದ್ರವಾಗಿದೆ, ಉತ್ಪನ್ನವಲ್ಲ. ಆದ್ದರಿಂದ ಇದರಲ್ಲಿ ಬೋಧಕರ ಪಾತ್ರವು ಅತಿ ಹೆಚ್ಚಿನದಷ್ಟೇ ಅಲ್ಲ. ಅತೀ ಮುಖ್ಯವಾದುದು ಕೂಡಾ ಆಗಿರುವುದರಿಂದ ಸಂವಾದವನ್ನು ಸುಗಮಗೊಳಿಸಲು ಬಯಸುವ ಯಾವುದೇ ಬೋಧಕನು ಈ ಮಾರ್ಗದಲ್ಲಿ ಅದನ್ನು ಸುಗಮಗೊಳಿಸಲು ಸಾಧ್ಯವಾಗುತ್ತದೆ.

**ದ್ವಿತೀಯ ಭಾಷಾ ತರಗತಿಯಲ್ಲಿ ಮಾತೃಭಾಷೆಯ ಬಳಕೆ**

ಮುಖ್ಯವಾಗಿ ಪ್ರಾಥಮಿಕ ಹಂತದಲ್ಲಿ ಮಕ್ಕಳಿಗೆ ನೀಡುವ ಮಾಹಿತಿಗಳಲ್ಲಿನ ಮುಖ್ಯವಾದ ಭಾಗವು ಕೇಳುಗರಲ್ಲಿ ಭಾವನಾತ್ಮಕ ಸಮಷ್ಟಿಯ ಪ್ರಜ್ಞೆಯನ್ನು ಹುಟ್ಟಿಸಲೆಂದು ರೂಪುಗೊಳಿಸಿದ ಕಥನಗಳನ್ನು ಒಳಗೊಂಡಿರುತ್ತದೆ. ಆದರೆ ಈ ಮಾಹಿತಿಗಳನ್ನು ಮಕ್ಕಳ ಗ್ರಹಿಕೆಗೆ ನಿಲುಕುವಂತೆ ಮಾಡಲು ಈ ಕಥನಗಳನ್ನು ಅವುಗಳ ಭಾಷಿಕ ಪ್ರತಿರೋಧವನ್ನು ಕಡಿಮೆಗೊಳಿಸುವ ಮೂಲಕ ಉತ್ತಮಗೊಳಿಸಬೇಕಾಗುತ್ತದೆ. L2 ತರಗತಿಕೋಣೆಗಳಲ್ಲಿ ಜಗತ್ತಿನಾದ್ಯಂತ ELT ಶಾಲೆಗಳು

ಮಕ್ಕಳ ಮಾತೃಭಾಷೆಯನ್ನು ವಿವೇಚನಾಶೀಲವಾಗಿ ಬಳಸಬೇಕೆಂದು ಶಿಫಾರಸು ಮಾಡಲು ಆರಂಭಿಸಿವೆ. ಆದರೆ 'ವಿವೇಚನಾಶೀಲ' ಎನ್ನುವ ಪದವು ಅಸ್ಪಷ್ಟವಾಗಿದೆ. ಒಬ್ಬ ಬೋಧಕನು ಇದನ್ನು ಹೇಗೆ ವ್ಯಾಖ್ಯಾನಿಸಬೇಕು? ಆಕೆ ಅಥವಾ ಆತ ಭಾಷಾಂತರ ಅಥವಾ ಪದಸಂಕೇತಗಳ ಮಿಶ್ರಣಕ್ಕೆ (code-mixing) ಮೊರೆ ಹೋಗಬಹುದು. ಆದರೆ ಭಾಷಾರ್ಜನೆಗೆ ಅನುಕೂಲ ಮಾಡಲು ಭಾಷಾಂತರ ಮಾಡುವುದು ಪರಿಣಾಮಕಾರಿ ತಂತ್ರವಲ್ಲ . ಪದಸಂಕೇತಗಳ ಮಿಶ್ರಣದಲ್ಲಿ ಮಾತೃಭಾಷೆಯ ವಾಕ್ಯರಚನೆಯನ್ನು ಆಧಾರವಾಗಿಟ್ಟುಕೊಳ್ಳಲಾಗುತ್ತದೆ, ಮತ್ತು ಆ ಚೌಕಟ್ಟಿನೊಳಗೆ ಇಂಗ್ಲೀಶಿನ ಕೆಲವು ಪದಗಳನ್ನು ಸೇರಿಸಲಾಗುತ್ತದೆ. ಉದಾಹರಣೆಗೆ 'ನಾನು ಇವತ್ತು ಬಹಳ busy ಇದ್ದೇನೆ' (ಇವತ್ತು ನಾನು ಬಹಳ ವ್ಯಸ್ತನಾಗಿದ್ದೇನೆ). ಹೆಚ್ಚಿನ ವಿದ್ಯಾವಂತರು (ಅನಕ್ಷರಸ್ಥರೂ ಸಹ) ಈ ತಂತ್ರವನ್ನು ಉಪಯೋಗಿಸುತ್ತಾರೆ. ಆದರೆ ಭಾಷಾರ್ಜನೆಗೆ ಇದೂ ಸಹ ಹೆಚ್ಚು ಪ್ರಯೋಜನವಾಗಲಾರದು. ಬೋಧಕರು ಮತ್ತೊಂದು ತಂತ್ರವನ್ನೂ ಬಳಸುತ್ತಾರೆ, ಅದು ಒಂದು ಪದಸಂಕೇತದಿಂದ (L1) ಮತ್ತೊಂದಕ್ಕೆ (L2) ಬದಲಾವಣೆ. ಈ ಬದಲಾವಣೆಯು ಸಂವಾದದ ಕ್ಷೇತ್ರದಲ್ಲಿ ನಡೆಯುತ್ತದೆ, ವಾಕ್ಯಗಳ ಕ್ಷೇತ್ರದಲ್ಲಲ್ಲ. ಈ ರೀತಿಯ ಅಂತರ್ಭಾಷೆಯು ಗುಣಾತ್ಮಕವಾಗಿ ಪದಸಂಕೇತಗಳ ಮಿಶ್ರಣ ಮತ್ತು ಭಾಷಾಂತರಕ್ಕಿಂತ ಭಿನ್ನವಾಗಿರುತ್ತದೆ, ಮತ್ತು ಇದನ್ನು ಬೋಧನೆಯ ಕ್ರಮದಲ್ಲಿ ಉಪಯೋಗಿಸಬಹುದು. ಈ ಅಂಶವನ್ನು ನಾನು ಕಥನದ ಒಂದು ತುಣುಕಿನ ಸಹಾಯದಿಂದ ನಿದರ್ಶಿಸುತ್ತೇನೆ, ಅದನ್ನು ಪದಸಂಕೇತಗಳ ಬದಲಾವಣೆಯ ಮೂಲಕ ಮೊದಲನೆಯ ಅಥವಾ ಎರಡನೆಯ ಇಯತ್ತೆಯ ಮಕ್ಕಳಿಗೆ ಪ್ರಸ್ತುತ ಪಡಿಸಬಹುದು:

ರಾಜು ಶಾಲೆಗೆ ನಡೆದುಕೊಂಡು ಬರುತ್ತಿದ್ದನು. ರಸ್ತೆಯ ಬದಿಯಲ್ಲಿ ದಟ್ಟ ಪೊದೆಗಳಿದ್ದವು. ಕೆಲವು ಪೊದೆಗಳಲ್ಲಿ ಹೂವುಗಳೂ ಬಿಟ್ಟಿದ್ದವು.

"ಎಷ್ಟು ಸುಂದರವಾಗಿವೆ!" ಎಂದು ಅವನು ತನ್ನಷ್ಟಕ್ಕೆ ಅಂದುಕೊಂಡನು. ತಕ್ಷಣ ಎಡಕ್ಕಿದ್ದ ಪೊದೆಗಳ ಎಲೆಗಳು ಅಲುಗಾಡುತ್ತಿರುವುದನ್ನು ಅವನು ಗಮನಿಸಿದನು.

"ಅಲ್ಲೆಲ್ಲೂ ಗಾಳಿ ಬೀಸುತ್ತಿಲ್ಲ. ಕೇವಲ ಎಲೆಗಳು ಮಾತ್ರ ಅಲುಗಾಡುತ್ತಿವೆ!" ರಾಜು ಕುತೂಹಲಭರಿತನಾದನು. "ಆ ಪೊದೆಯಲ್ಲಿ ಏನೋ ಇರಬೇಕು, ನನಗೆ ಖಂಡಿತ ಹಾಗನಿಸುತ್ತದೆ."

ಅವನು ಆ ಪೊದೆಯ ಬಳಿಗೆ ಹೋಗಿ ತನ್ನ ಕೈಗಳಿಂದ ಎಲೆಗಳನ್ನು ಒಂದೆಡೆ ಸರಿಸಿ ಇಣುಕಿ ನೋಡಿದನು.

“ಅದೇನದು!” (“What is that?”) ರಾಜುಗೆ ಕುತೂಹಲ.

“ಮಿಯಾಂವ್!”

“ಓಹೋ, ಅದೊಂದು ಬೆಕ್ಕು!” (“Oh, it’s a cat!”) ಎಂದು ಅವನು ಅಚ್ಚರಿಯಲ್ಲಿ ಹೇಳಿದನು.

ಈ ಕತೆಯನ್ನು ಕಲಿಕಾರ್ಥಿಯ ಮಾತೃಭಾಷೆಯಲ್ಲಿ ಹೇಳಲಾಯಿತು ಮತ್ತು ಎಲ್ಲೆಲ್ಲಿ ಗೆರೆಗಳ ಒತ್ತನ್ನು ನೀಡಲಾಗಿದೆಯೋ ಅಲ್ಲೆಲ್ಲ ಕಥನವನ್ನು ಇಂಗ್ಲೀಶಿಗೆ ಬದಲಾಯಿಸಲಾಗುತ್ತದೆ ಎಂದು ಭಾವಿಸೋಣ. ಆಗ L2 ದಲ್ಲಿ ಇರುವ ಕಲಿಕಾರ್ಥಿಗಳಿಗೆ ಆ ಅಭಿವ್ಯಕ್ತಿಗಳನ್ನು ಗ್ರಹಿಸಲು ಯಾವ ತಡೆಯೂ ಇರುವುದಿಲ್ಲ. ಇಲ್ಲಿ ಸೂಚಿಸಿರುವಂತೆ ಪದಸಂಕೇತಗಳ ಬದಲಾವಣೆಯ ತಂತ್ರವು ಭಾಷಾಂತರದ ಅಗತ್ಯವಿಲ್ಲದೆಯೆ ಅದರ ಸಂದೇಶವನ್ನು ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ. ಗೆರೆಗಳ ಒತ್ತನ್ನು ನೀಡಿದ ಭಾಗದಲ್ಲಿ ಅಡಕವಾಗಿರುವ ವಿಚಾರಗಳನ್ನು ಕಲಿಕಾರ್ಥಿಗಳ ಮನಸ್ಸುಗಳ ಒಳಗೆ ಮನೋಪಠ್ಯಗಳ (mental texts) ರೂಪದಲ್ಲಿ ಹುಟ್ಟಿಸಲಾಗುವಂತೆ ಈ ಕಥನವನ್ನು ರೂಪಿಸಲಾಗಿದೆ ಎಂಬುದನ್ನು ಇಲ್ಲಿ ಗಮನಿಸಿ.

**ಸಂವಾದದ ಪರಿಭಾಷೆಯಲ್ಲಿ ಪಠ್ಯಕ್ರಮದ ಧ್ಯೇಯಗಳು**

ಪಠ್ಯಕ್ರಮದ ಧ್ಯೇಯಗಳನ್ನು ಸಂರಚನೆಗಳು ಮತ್ತು ಅವುಗಳಿಗೆ ಸಂಬಂಧಪಟ್ಟ ಸಂವಹನಾತ್ಮಕ ಕಾರ್ಯಗಳ ಪರಿಭಾಷೆಯಲ್ಲಿ ಅಲ್ಲದೆ ಸಂವಾದದ ಪರಿಭಾಷೆಯಲ್ಲಿ ಮರುವ್ಯಾಖ್ಯಾನಿಸುವ ಅಗತ್ಯವನ್ನು ಸಂವಾದಾತ್ಮಕ ಬೋಧನಾ ಕ್ರಮವು ಸೃಷ್ಟಿಸುತ್ತದೆ. ಕೋಷ್ಟಕ 1 ರಲ್ಲಿ ಒಂದರಿಂದ ಹತ್ತರವರೆಗಿನ ತರಗತಿಗಳಿಗೆಂದು ರೂಪಿಸಲಾದ ವಿವಿಧ ಸಂವಾದಗಳನ್ನು ಕೊಡಲಾಗಿದೆ.

ಕೋಷ್ಟಕ 1

ತರಗತಿಗಳಿಗೆ ತಕ್ಕಂತೆ ರೂಪಿತವಾದ ಸಂವಾದಗಳು

| ಸಂಖ್ಯೆ | ವಿವಿಧ ಪ್ರಕಾರದ ಸಂವಾದಗಳು | ತರಗತಿಗಳು | | | | | | | | | |
|---|---|---|---|---|---|---|---|---|---|---|---|
| | | 1 | 2 | 3 | 4 | 5 | 6 | 7 | 8 | 9 | 10 |

| | | | | | | | | | | | |
|---|---|---|---|---|---|---|---|---|---|---|---|
| 1 | ಸಂಭಾಷಣೆಗಳು | | | | | | | | | | |
| 2 | ಚಿತ್ರಣಗಳು | | | | | | | | | | |
| 3 | ಶಿಶುಗೀತೆ/ಹಾಡುಗಳು/ಕವಿತೆಗಳು | | | | | | | | | | |
| 4 | ಕಥನಗಳು | | | | | | | | | | |
| 5 | ದಿನಚರಿ | | | | | | | | | | |
| 6 | ಪತ್ರಗಳು | | | | | | | | | | |
| 7 | ನೋಟೀಸುಗಳು | | | | | | | | | | |
| 8 | ನಾಟಕ | | | | | | | | | | |
| 9 | ವ್ಯಕ್ತಿಚಿತ್ರಗಳು | | | | | | | | | | |
| 10 | ಜೀವನಚರಿತ್ರೆಗೆ ಸಂಬಂಧಿಸಿದ ವಿವರಗಳು | | | | | | | | | | |
| 11 | ಲಘು ಪ್ರಬಂಧಗಳು/ಪ್ರಬಂಧಗಳು | | | | | | | | | | |
| 12 | ವರದಿಗಳು | | | | | | | | | | |
| 13 | ವಾರ್ತೆಗಳು | | | | | | | | | | |
| 14 | ಘೋಷಣೆಗಳು | | | | | | | | | | |
| 15 | ಭಾಷಣಗಳು | | | | | | | | | | |
| 16 | ರಿವ್ಯೂಗಳು | | | | | | | | | | |
| 17 | ಚರ್ಚೆಗಳು/ವಾದಗಳು | | | | | | | | | | |
| 18 | ಸಭಾ ನಿರ್ವಹಣೆ | | | | | | | | | | |

| | | | | | | | | | | | |
|---|---|---|---|---|---|---|---|---|---|---|---|
| 19 | ಪ್ರವಾಸ ಕಥನಗಳು | | | | | | | | | | |
| 20 | ನೃತ್ಯ ನಿರ್ದೇಶನ | | | | | | | | | | |

**ಸಂವಾದಗಳ ಶ್ರೇಣೀಕರಣ/ವರ್ಗೀಕರಣ**

ಕೋಷ್ಟಕ 1 ರಲ್ಲಿ ತೋರಿಸಿದಂತೆ ಸಂವಾದವನ್ನು ವಿವಿಧ ಹಂತಗಳಲ್ಲಿ ರಚಿಸಬಹುದು. ಆದರೆ ನಿರ್ದಿಷ್ಟ ಹಂತವೊಂದರಲ್ಲಿ ಸಂವಾದಗಳ ಯಾವ ಯಾವ ಲಕ್ಷಣಗಳನ್ನು ಕಲಿಯಬೇಕು ಎನ್ನುವುದನ್ನು ಅದು ಸ್ಪಷ್ಟವಾಗಿ ಸೂಚಿಸುವುದಿಲ್ಲ. ಉದಾಹರಣೆಗೆ ಸಂಭಾಷಣೆಯಂತಹ ಸಂವಾದವನ್ನು ತೆಗೆದುಕೊಳ್ಳೋಣ; ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವ ಒಬ್ಬ ಕಲಿಕಾರ್ಥಿಯು ಕಟ್ಟುವ ಸಂಭಾಷಣೆಗಳಿಗೂ ಪ್ರೌಢಶಾಲೆಯ ವಿದ್ಯಾರ್ಥಿಯೊಬ್ಬ ಕಟ್ಟುವ ಸಂಭಾಷಣೆಗಳಿಗೂ ಇರುವ ವ್ಯತ್ಯಾಸಗಳನ್ನು ಗುರುತಿಸಬೇಕಾದರೆ ನಾವು ಸಂವಾದದ ವಿವಿಧ ಭಾಷಿಕ ಹಂತಗಳನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಸಂಭಾಷಣೆಯಂತಹ ಸಂವಾದವು ಒಂದು ಆರಂಭವನ್ನೂ ಮತ್ತು ಆ ಆರಂಭಕ್ಕೆ ನೀಡುವ ಒಂದು ಪ್ರತಿಕ್ರಿಯೆಯನ್ನೂ ಒಳಗೊಂಡಿರುತ್ತದೆ. ಒಬ್ಬ ಆರಂಭಿಕ ಹಂತದ ವಿದ್ಯಾರ್ಥಿಯ ಸಂಭಾಷಣೆಯು ಒಂದು ಆರಂಭ ಮತ್ತು ಒಂದು ಪ್ರತಿಕ್ರಿಯೆಯನ್ನು ಮಾತ್ರ ಒಳಗೊಂಡಿರುತ್ತದೆ, ನಂತರ ಅವನು ಅಥವಾ ಅವಳು ಮೇಲಿನ ಹಂತಗಳಿಗೆ ಹೋದಂತೆಲ್ಲ ಸಂಭಾಷಣೆಗಳು ಸಂರಚನೆಯ ದೃಷ್ಟಿಯಿಂದ ಮತ್ತು ಶೈಲಿಯ ದೃಷ್ಟಿಯಿಂದಲೂ ಹೆಚ್ಚು ನಯವಾಗುತ್ತ ಬರುತ್ತವೆ. ಈ ಅಂಶವನ್ನು ಕೆಲವು ಸಂಭಾಷಣೆಯ ತುಣುಕುಗಳ ಮೂಲಕ ನಿದರ್ಶಿಸುತ್ತೇನೆ:

1. ರಾಜು: ವೇರ್ ಈಸ್ ಯುವರ್ ಬುಕ್? (ನಿನ್ನ ಪುಸ್ತಕ ಎಲ್ಲಿದೆ?)

    ರಾಣಿ: ಮೈ ಬುಕ್ ಈಸ್ ಆನ್ ದ ಟೇಬಲ್. (ನನ್ನ ಪುಸ್ತಕವು ಮೇಜಿನ ಮೇಲಿದೆ.)

2. ಪ್ರಿಯಾ: ವೇರ್ ಈಸ್ ಯುವರ್ ಬುಕ್, ಮಾಯಾ? (ನಿನ್ನ ಪುಸ್ತಕ ಎಲ್ಲಿದೆ, ಮಾಯಾ?)

    ಮಾಯಾ: ಇಟ್ ಈಸ್ ಹಿಯರ್, ಇನ್ ಮೈ ಬ್ಯಾಗ್. (ಅದು ಇಲ್ಲಿದೆ, ನನ್ನ ಚೀಲದಲ್ಲಿ.)

3. ರಹೀಮ: ಯು ನೀಡ್ ಸಮ್ ಮನಿ, ಡೋಂಟ್ ಯೂ? (ನಿನಗೆ ಸ್ವಲ್ಪ ದುಡ್ಡು ಬೇಕು, ಅಲ್ಲವೆ?)

ರಾಮು: ವೆಲ್, ಆಸ್ ಅ ಮ್ಯಾಟರ್ ಆಫ್ ಫ್ಯಾಕ್ಟ್ ಐ ಡು. (ಹೌದು, ನಿಜ ಹೇಳಬೇಕೆಂದರೆ ಬೇಕಾಗಿದೆ.)

4. ಜೋಸೆಫ್: ಐ ವಂಡರ್ ವ್ಹೈ ದಟ್ ಮ್ಯಾನ್ ಈಸ್ ಸೊ ಹಾರ್ಶ್ ವಿತ್ ಹಿಸ್ ವೈಫ್. (ಆ ಮನುಷ್ಯ ತನ್ನ ಹೆಂಡತಿಯೊಂದಿಗೆ ಯಾಕೆ ಅಷ್ಟು ಕಠಿಣವಾಗಿ ವರ್ತಿಸುತ್ತಾನೆ ಎಂದು ಅರ್ಥವಾಗುವುದಿಲ್ಲ.)

ಮೇರಿ: ವ್ಹೈ ದಟ್ ಕ್ವೆಶ್ಚನ್ ಆಲ್ ಆಫ್ ಅ ಸಡನ್? (ಎಲ್ಲಾ ಬಿಟ್ಟು ಈಗ್ಯಾಕೆ ಈ ಪ್ರಶ್ನೆ ಹುಟ್ಟಿತು?)

ಜೋಸೆಫ್: ಓಹ್ ನಥಿಂಗ್. ಯು ಸೀ, ಐ ವಾಸ್ ಜಸ್ಟ್ ಥಿಂಕಿಂಗ್ ಅಬೌಟ್ ಹಿಮ್. (ಓಹ್, ಏನಿಲ್ಲ. ಸುಮ್ಮನೆ ಅವನ ಬಗೆಗೆ ಯೋಚಿಸುತ್ತಿದ್ದೆ.)

ಮೇರಿ: ಡೋಂಟ್ ಪ್ರಿಟೆಂಡ್. ಯು ವರ್ ಥಿಂಕಿಂಗ್ ಅಬೌಟ್ ಹರ್, ವರಂಟ್ ಯು? (ನಾಟಕ ಮಾಡಬೇಡ. ನೀನು ಅವಳನ್ನು ಕುರಿತು ಯೋಚಿಸುತ್ತಿದ್ದೆ, ಅಲ್ಲವೆ?)

ಪ್ರಾಥಮಿಕ ಹಂತದಲ್ಲಿ ಕಟ್ಟಲ್ಪಡುವ ಸಂಭಾಷಣೆಗಳಿಗೆ ಸಂವಾದದ ಮಾರ್ಕರ್ ಗಳು ಅಥವಾ ಟ್ಯಾಗುಗಳು ಇರುವುದಿಲ್ಲ. ಆದರೆ ಪ್ರೌಢ ಶಾಲೆಯ ವಿದ್ಯಾರ್ಥಿಯೊಬ್ಬ ಕಟ್ಟುವ ಸಂಭಾಷಣೆಗಳಲ್ಲಿ ಅಂತಹ ಭಾಷಿಕ ಅಂಶಗಳು ಇರಬಹುದು. ಇದೇ ರೀತಿಯ ಭೇದಗ್ರಹಣವು ಇನ್ನಿತರ ಸಂವಾದಗಳಿಗೂ ಅವಶ್ಯವಾಗಿರುತ್ತದೆ. ಈ ರೀತಿ ನಾವು ಸಂವಾದದ ಶ್ರೇಣೀಕರಣ/ವರ್ಗೀಕರಣವನ್ನು ಸಾಧಿಸಬಹುದು ಮತ್ತು ಅದನ್ನು ಮುಂಚಿನ ಸಂರಚನಾತ್ಮಕ ವರ್ಗೀಕರಣಕ್ಕೆ ಬದಲಾಗಿ ಬಳಸಬಹುದು.

**ತರಗತಿ ಪ್ರಕ್ರಿಯೆಯಲ್ಲಿ ಮಾಡ್ಯೂಲ್ ಗಳ ವಿಧಾನ**

ಸಂವಾದಾತ್ಮಕ ಬೋಧನಾ ಕ್ರಮವು ತರಗತಿಕೋಣೆಯಲ್ಲಿ ನಡೆಯುವ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ಮಾಡ್ಯುಲ್ ಗಳ ಒಂದು ವಿಧಾನವನ್ನು ಕಲ್ಪಿಸಿಕೊಳ್ಳುತ್ತದೆ. ಒಂದು ಮಾಡ್ಯೂಲ್ ಅನ್ನು ವ್ಯಾಖ್ಯಾನಿಸುವುದಾದರೆ, ಅದು ಬೋಧನಾ ಕ್ರಮದ ಉದ್ದೇಶಗಳಿಗಾಗಿ ಒಂದು

ವಿಚಾರ ಅಥವಾ ಒಂದು ಪರಿಕಲ್ಪನೆಯನ್ನು ಕಟ್ಟಲು ದಾರಿ ಮಾಡಿಕೊಡುವ ಚಟುವಟಿಕೆಗಳ ಒಂದು ಒಟ್ಟೂ ಸಂಚಯ ಎನ್ನಬಹುದು . ಒಂದು ಮಾಡ್ಯೂಲ್ ಸ್ವತಂತ್ರವಾಗಿ ನಿಲ್ಲಬಲ್ಲುದಾದರೂ ಅದನ್ನು ಮತ್ತೊಂದು ಮಾಡ್ಯೂಲ್ ನ ಜೊತೆಗೂಡಿಸಿಯೂ ಬಳಸಬಹುದು. ಈ ಪ್ರತಿಯೊಂದೂ ಮಾಡ್ಯೂಲ್ ಗಳೊಂದಿಗಿನ ಕಾರ್ಯಕಲಾಪಗಳು ಕೊನೆಗೊಂಡ ನಂತರ ಕಲಿಕಾರ್ಥಿಗಳ ಮನಸ್ಸಿನೊಳಗೆ ಕೆಲವು ನಿರ್ಮಿತಿಗಳು ವಿಕಸಿತಗೊಂಡಿರುತ್ತವೆ. 'ತರಗತಿ ಪ್ರಕ್ರಿಯೆ' ಎನ್ನುವುದು ಅರ್ಥಗರ್ಭಿತವಾದ ಒಂದು ಅಭಿವ್ಯಕ್ತಿಯಾಗಿದೆ, ಅಂದರೆ ಅದರಲ್ಲಿನ ಪ್ರಕ್ರಿಯೆಗಳ ಸ್ವರೂಪ ಲಕ್ಷಣಗಳನ್ನು ಸುಸಂಗತವಾಗಿ ನಿರ್ಧರಿಸಲಾಗುತ್ತದೆ. ಒಂದು ನಿರ್ದಿಷ್ಟ ಹಂತವನ್ನು ಗುರಿಯಾಗಿರಿಸಿಕೊಂಡ ಸಂಭಾಷಣೆಗಳು, ಚಿತ್ರಣಗಳು, ಕಥನಗಳು, ಹಾಡುಗಳು, ಪತ್ರಗಳು ಇತ್ಯಾದಿ ಸಂವಾದಗಳನ್ನು ಆಲಿಸಲೆಂದು ಇರುವ ಒಂದು ಮಾತ್ರ ಕಥನದೊಳಗೆ ಅಳವಡಿಸಿಕೊಂಡು  ಆಲಿಸುವ ಮತ್ತು ಓದುವ ಕೌಶಲಗಳನ್ನು ಬೆಳೆಸಲು ಬಳಸಿಕೊಳ್ಳಬಹುದು. ಇವುಗಳ ಮೂಲಕ ನಡೆಯುವ ಸಂವಹನಗಳು ಕಲಿಕಾರ್ಥಿಗಳಿಗೆ ನಿರ್ಮಿತ ಸಂವಾದಗಳ (ಮೌಖಿಕ ಮತ್ತು ಲಿಖಿತ-ಎರಡೂ ರೂಪಗಳಲ್ಲಿ) ಒಳಗೆ  ಪ್ರವೇಶವನ್ನು ಕಲ್ಪಿಸುತ್ತವೆ.

ತರಗತಿ ಪ್ರಕ್ರಿಯೆಯ ಮಾಡ್ಯೂಲ್ ಅನ್ನು ಒಂದು ಪ್ರಕ್ರಿಯಾತ್ಮಕ ಘಟಕವೆಂಬಂತೆ ನೋಡಿದರೆ ಅದರೊಳಗೆ  ಆಗುವ ಒಂದು ಸಂವಾದದ ಬೆಳವಣಿಗೆಯನ್ನು ಭಾಷಾ ತರಗತಿಯ ಮತ್ತೊಂದು ಮಾಡ್ಯೂಲ್ ನ ರೀತಿಯಲ್ಲಿ ಕಲ್ಪಿಸಿಕೊಳ್ಳಬಹುದು. ಇವು ಕೇವಲ ತರಗತಿ ಪ್ರಕ್ರಿಯೆಯ ಮಾಡ್ಯೂಲ್ ಗಳಲ್ಲ, ಭಾಷಾ ಮಾಡ್ಯೂಲ್ ಗಳೂ ಆಗಿವೆ ಎಂದು ಗುರುತಿಸುವುದು ಸುಲಭ. ಉದಾಹರಣೆಗೆ ಆಲಿಸುವುದು ಮತ್ತು ಮಾತನಾಡುವುದು ಈ ಎರಡೂ ಚಟುವಟಿಕೆಗಳನ್ನು ಒಳಗೊಳ್ಳುವ ಮಾತುಕತೆಯನ್ನು ತನ್ನ ಬೋಧನಾ ವಿಧಾನದ  ಉದ್ದೇಶಗಳಿಂದ ಸ್ವತಂತ್ರವಾಗಿ ನಿಲ್ಲಬಲ್ಲ ಒಂದು ಭಾಷಿಕ ಮಾಡ್ಯೂಲ್ ಎಂದು ಪರಿಗಣಿಸಬಹುದು, ಏಕೆಂದರೆ ಒಂದು ಭಾಷೆಯು ಮಾತನಾಡುವವರ ನಡುವಿನ ಪರಸ್ಪರ ಸಂವಹನದ ಮೂಲಕ  ಉಳಿದುಕೊಳ್ಳುತ್ತದೆ. ಅದೇ ರೀತಿ ಓದುವುದು ಕೂಡಾ ವ್ಯಕ್ತಿಗಳು ತಮ್ಮಷ್ಟಕ್ಕೆ ತಾವು ಕೈಗೊಳ್ಳುವ ಒಂದು ಸ್ವತಂತ್ರ ಚಟುವಟಿಕೆಯಾಗಿದೆ, ಅದೊಂದು ಬೋಧನಾ ಕ್ರಮದ ಚಟುವಟಿಕೆ ಎಂದು ಪರಿಗಣಿಸಬೇಕಾಗಿಲ್ಲ. ಸಂವಾದ  ರಚನೆಯು ಹೀಗೆ ಸ್ವತಂತ್ರವಾಗಿ ನಿಲ್ಲಬಲ್ಲ ಮತ್ತೊಂದು ಭಾಷಿಕ ಮಾಡ್ಯೂಲ್ ಆಗಿದೆ. ಹೀಗೆ ಹೇಳೋಣ, ಇವೆಲ್ಲವೂ ಒಂದು ಸುಸಂಯೋಜಿತ ಸಮಷ್ಟಿಯನ್ನು ರಚಿಸುವುದಕ್ಕಾಗಿ ಅನುಕ್ರಮಣಿಕೆಯಲ್ಲಿ ಒಂದಕ್ಕೊಂದು ಜೋಡಿಸಲ್ಪಡುವ  ಉಪ-ಮಾಡ್ಯೂಲ್ ಗಳಾಗಿವೆ.

**ಕ್ಷೇತ್ರ ಪುರಾವೆಗಳು**

2007ರಲ್ಲಿ DOP ಯನ್ನು ಮೊಟ್ಟ ಮೊದಲ ಬಾರಿಗೆ ಕೇರಳದಲ್ಲಿ ಪರಿಚಯಿಸಿದಾಗ ಒಂದು ಜಿಲ್ಲೆಯ (ಅಲಪುಜ್ಹಾ) ಪ್ರಾಥಮಿಕ ಶಾಲೆಯ ಮಕ್ಕಳು ಇಂಗ್ಲೀಶಿನಲ್ಲಿ ತಮ್ಮ ಸೃಜನಶೀಲ ಬರವಣಿಗೆಗಳನ್ನು ಉಳ್ಳ ಸುಮಾರು 20,00,00 ಪತ್ರಿಕೆಗಳನ್ನು ಹೊರತಂದಿದ್ದರು. ಶಿಕ್ಷಕ ತರಬೇತಿದಾರರು, ಬೋಧಕರು ಮತ್ತು ವಿದ್ಯಾರ್ಥಿಗಳ ತಜ್ಞತೆಯ ಒಂದು ಸಾಮಾನ್ಯ ಮಟ್ಟವು ಹೆಚ್ಚಿದ್ದನ್ನು ನೋಡಿದರೆ ಅದರಲ್ಲಿ ಹೊಸತಾಗಿ ಪರಿಚಯಿಸಿದ ಪರಿಷ್ಕೃತ ಇಂಗ್ಲೀಶ್ ಪಠ್ಯಕ್ರಮದ ಪರಿಣಾಮಗಳು ಕಂಡುಬರುತ್ತವೆ-ಈ ಸಂಗತಿಯನ್ನು ದಕ್ಷಿಣ ಭಾರತದ ವಲಯದಲ್ಲಿ ಬರುವ ಮತ್ತು ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ ಇಂಗ್ಲೀಶ್ ಭಾಷಾ ಪ್ರಾದೇಶಿಕ ಸಂಸ್ಥೆಯು (ರೀಜನಲ್ ಇನ್ಸ್ಟಿಟ್ಯೂಟ್ ಆಫ್ ಇಂಗ್ಲೀಶ್, RIESI) ನಡೆಸಿದ ಅಧ್ಯಯನವು ದಾಖಲಿಸಿದೆ. ಕ್ರಮೇಣ 2011ರಲ್ಲಿ ಕೈಗೊಂಡ ಪಠ್ಯಕ್ರಮ ಪರಿಷ್ಕರಣೆಯ ಒಂದು ಅಂಗವಾಗಿ DOP ಯನ್ನು ಆಂಧ್ರಪ್ರದೇಶದಲ್ಲಿಯೂ ಪರಿಚಯಿಸಲಾಯಿತು. ಈ ಹೊಸ ಬೋಧನಾ ಕ್ರಮವು ಒಮ್ಮೊಮ್ಮೆ ಪ್ರತಿಕೂಲ ಸನ್ನಿವೇಶಗಳನ್ನು ಹೊಂದಿದ ಜಾಗಗಳಲ್ಲಿಯೂ ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನು ಆಂಧ್ರಪ್ರದೇಶದ ನಾಲಗೊಂಡ ಜಿಲ್ಲೆಯ ನರಕೇತಪಲ್ಲಿ ಮಂಡಲ ಪಂಚಾಯತಿ ವ್ಯಾಪ್ತಿಯ 42 ಸರಕಾರಿ ಪ್ರಾಥಮಿಕ ಶಾಲೆಗಳಲ್ಲಿ ನಿದರ್ಶಿಸಲಾಯಿತು. ಬೇರೆ ಬೇರೆ ಶಾಲೆಗಳ ಮಕ್ಕಳು ನಾಟಕಗಳು, ನೃತ್ಯಗಳು ಮತ್ತು ಸಾಭಿನಯ ಹಾಡುಗಳನ್ನುಇಂಗ್ಲೀಶಿನಲ್ಲಿ ಪ್ರದರ್ಶಿಸಿದರು. ಅಲ್ಲದೇ ಅಲ್ಲಿನ ಪ್ರಾಥಮಿಕ ಶಾಲೆಯ ಮಕ್ಕಳು ಯಾವ ಸಹಾಯವನ್ನೂ ತರಗತಿಕೋಣೆಯ ಹೊರಗಿನಿಂದ ಪಡೆಯದೇ ಇಂಗ್ಲೀಶಿನಲ್ಲಿಯೇ ರೂಪಿಸಿದ 3000 ಕ್ಕಿಂತ ಹೆಚ್ಚಿನ ನಿಯತಕಾಲಿಕಗಳ ವರ್ಣರಂಜಿತ ಪ್ರದರ್ಶನವೂ ಇತ್ತು.

ಈ ಹೊಸ ಪಠ್ಯಕ್ರಮವು ಕಲ್ಪಿಸಿಕೊಂಡ ತರಗತಿಕೋಣೆಯ ಪ್ರಕ್ರಿಯೆಯನ್ನು ಅನುಸರಿಸಿದ ಬೋಧಕರು ಬೋಧನಾ ಕ್ರಮದಲ್ಲಾದ ಪಲ್ಲಟದ ಪರಿಣಾಮಗಳನ್ನು ಅರ್ಥಮಾಡಿಕೊಂಡಿದ್ದಾರೆ. ಸುಮ್ಮನೆ ಶಬ್ದಗಳ ಮತ್ತು ವಾಕ್ಯಗಳ ಅರ್ಥವನ್ನು ವಿವರಿಸುವ ಮೂಲಕ ಅಥವಾ ಗ್ರಹಣಶಕ್ತಿಯ ಪ್ರಶ್ನೆಗಳನ್ನು ಮತ್ತು ಅವುಗಳ ಉತ್ತರಗಳನ್ನು ಕಲಿಯಲು ವಿದ್ಯಾರ್ಥಿಗಳಿಗೆ ಹೇಳುವ ಮೂಲಕ ಪಾಠಗಳನ್ನು ಕಲಿಸುವುದರಿಂದ ಏನೂ ಪ್ರಯೋಜನವಿಲ್ಲ ಎನ್ನುವುದನ್ನು ಅವರು ಈಗ ಅರಿತುಕೊಂಡಿದ್ದಾರೆ. ಮಕ್ಕಳು ತಮ್ಮದೇ ಸ್ವಂತದ ಮೌಖಿಕ ಮತ್ತು ಲಿಖಿತ ಸಂವಾದವನ್ನು ಕಟ್ಟಿಕೊಳ್ಳಲು ಅವರು ಸಹಾಯ ಮಾಡಬೇಕು.

DOP ಯನ್ನು ಬಳಸುವ ಹೆಚ್ಚಿನ ತರಗತಿಗಳಲ್ಲಿ ಕಂಡುಬರುವ ಬದಲಾವಣೆಗಳು ಇಂತಿವೆ:

1) ಮಕ್ಕಳ ಗುಂಪುಗಳು  ಚಾರ್ಟುಗಳನ್ನು ತಯಾರಿಸಿ ಪ್ರದರ್ಶಿಸುವುದು.
2) ಸಂವಹನವನ್ನು ಉತ್ತೇಜಿಸಲು ಬೋಧಕರು ಚಿತ್ರಗಳನ್ನು ಬಿಡಿಸುವುದು.
3) ಪಠ್ಯಪುಸ್ತಕಗಳಲ್ಲಿ ಕೊಟ್ಟ ಚಿತ್ರಗಳನ್ನು ದೊಡ್ಡ ಕ್ಯಾನ್ವಾಸುಗಳಲ್ಲಿ ಚಿತ್ರಿಸಿ ಕಟೌಟುಗಳನ್ನು ತಯಾರಿಸುವುದು
4) ಗುಂಪುಗಳಲ್ಲಿ ಕೂತು ಮಕ್ಕಳು ತಮ್ಮ ಓದಿನ ಅನುಭವವನ್ನು ಇತರರೊಂದಿಗೆ ಹಂಚಿಕೊಳ್ಳುವುದು.
5) ಬೋಧಕರು ಮತ್ತು ಕಲಿಕಾರ್ಥಿಗಳ ನಡುವೆ ಉತ್ತಮ ಸಂವಹನ.
6) ಸಿಬ್ಬಂದಿ ವರ್ಗದವರು ತಂಡದ ಇತರ ಸದಸ್ಯರೊಂದಿಗೆ ಸಹಕರಿಸಿ ಕೆಲಸ ಮಾಡುವುದನ್ನು ಕಾಣಬಹುದು.
7) ಮೊಬೈಲ್ ಫೋನುಗಳನ್ನು ಬಳಸಿಕೊಂಡು ಬೋಧಕರು ಮಕ್ಕಳ ಪ್ರದರ್ಶನಗಳನ್ನು ದಾಖಲಿಸಿ ಇಡುವುದು.

DOP ಯು, ಭಾಷಿಕ ಸಾಮ್ರಾಜ್ಯಶಾಹಿಯು ಅಪಾಯಕಾರಿಯಾಗಿ ಹರಡಿಕೊಳ್ಳುವುದನ್ನು ತಡೆಯುವ ಉದ್ದೇಶದಿಂದ ಊರ್ಜಿತವಾಗಬಲ್ಲ ಬೋಧನಾತ್ಮಕ ಮಾದರಿಗಳನ್ನು ಹೇಗೆ ರೂಪುಗೊಳಿಸಬಹುದು ಎಂಬುದರ ಮೇಲೆ ಎರಡು ದಶಕಕ್ಕಿಂತಲೂ ಹೆಚ್ಚು ಸಮಯದವರೆಗೆ ತೀವ್ರ ಪ್ರಯೋಗಗಳನ್ನು ನಡೆಸಿ, ನಂತರ ಇಂಗ್ಲೀಶನ್ನು ನಿರ್ವಸಾಹತೀಕರಣಗೊಳಿಸುವುದರ ಜೊತೆಗೆ ಸಿದ್ಧಾಂತ ಮತ್ತು ಅದನ್ನು ಕ್ರಿಯೆಗೆ ಇಳಿಸುವುದರ ನಡುವೆ ಕೊಂಡಿಯನ್ನು ಸೃಷ್ಟಿಸುವ ಮೂಲಕ ಸಿದ್ಧಗೊಂಡ ಒಂದು ಬೋಧನಾಕ್ರಮವಾಗಿದೆ.  ಈ ಹೊಸ ಬೋಧನಾ ಕ್ರಮವು ಇಂಗ್ಲೀಶಿನಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳ ಕಳಪೆ ಗುಣಮಟ್ಟದ ಸಾಧನೆಗೆ ಸಂಬಂಧಪಟ್ಟಂತೆ ಇರುವ ಹೆಚ್ಚಿನ ಸಮಸ್ಯೆಗಳನ್ನು ಬಗೆಹರಿಸಬಲ್ಲುದು ಎಂದು ನಿರೀಕ್ಷಿಸಲಾಗಿದೆ.

*ಡಾ. ಕೆ. ಎನ್. ಆನಂದನ್ ಅವರು ಹೈದರಾಬಾದಿನ CIEFL ನಿಂದ PGCTE, PGDTE, M.litt, ಮತ್ತು ಪಿಎಚ್ಡಿ ಪದವಿಗಳನ್ನು ಪಡೆದಿದ್ದಾರೆ. ನಂತರ ಕೇರಳದ SSA ಜೊತೆಗೆ ಸಲಹಾಕಾರರಾಗಿ*

*ಕೆಲಸ ಮಾಡಿದರು. ಕೇರಳದ ಸರಕಾರವು ಪಠ್ಯಕ್ರಮವನ್ನು ಪುನರ್ಪರಿಶೀಲಿಸಿ ಪರಿಷ್ಕರಣೆ ಮಾಡಿದಾಗ (2007ರಲ್ಲಿ) ಅದರಲ್ಲಿ ಡಾ ಆನಂದನ್ ಅವರು ದ್ವಿತೀಯ ಭಾಷೆಯ ಸಂವಾದಾತ್ಮಕ ಬೋಧನಾಕ್ರಮಕ್ಕೆ ಸಂಬಂಧಿಸಿದಂತೆ ತಮ್ಮ ಕೊಡುಗೆಯನ್ನಿತ್ತಿದ್ದಾರೆ. ಅವರು 2007 ರ KCF ಅನ್ನು ರೂಪಿಸುವ ಸಲುವಾಗಿ ಸ್ಥಾಪಿತವಾದ ಇಂಗ್ಲೀಶ್ ಫೋಕಸ್ ಗ್ರೂಪಿನ ಅಧ್ಯಕ್ಷರೂ ಆಗಿದ್ದರು. ಪ್ರಸ್ತುತ ಅವರು ಹೈದರಾಬಾದಿನ APREIS ನಲ್ಲಿ ಸಲಹಾಕಾರರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ ಮತ್ತು ಆಂಧ್ರ ಪ್ರದೇಶದ ಇಂಗ್ಲೀಶ್ ಪಠ್ಯಪುಸ್ತಕಗಳ ಸಂಪಾದಕ ಮಂಡಳಿಯಲ್ಲಿಯೂ ಇದ್ದಾರೆ.* *anandan.kn@gmail.com*

**ಚಿಂತನಾತ್ಮಕ ಪ್ರಶ್ನೆಗಳು:**

1. ಇದರಲ್ಲಿ ಬಳಸಲಾಗಿರುವ ಡಿಸ್ಕೋರ್ಸ್ (ಸಂವಾದ) ಎಂಬ ಪಾರಿಭಾಷಿಕ ಪದವನ್ನು ಹೇಗೆ ಗ್ರಹಿಸುತ್ತೀರಿ?
2. ಭಾರತದ ಶಾಲೆಗಳಲ್ಲಿ ಇರುವ ಇಂಗ್ಲೀಶ್ ಭಾಷಾ ಬೋಧನೆಯ ಸಾಂಪ್ರದಾಯಿಕ ವಿಧಾನಗಳು ಯಾವವು, ಅವುಗಳಿಗೂ ಮತ್ತು ಸಂವಾದಾತ್ಮಕ ಬೋಧನಾಕ್ರಮಕ್ಕೂ ಏನು ವ್ಯತ್ಯಾಸ?
3. ಸಂವಾದಾತ್ಮಕ ಬೋಧನಾಕ್ರಮವು ಯಾವ ರೀತಿಯಲ್ಲಿ ಪರಿಣಾಮಕಾರಿಯಾಗಿದೆ ಎಂದು ಭಾವಿಸುತ್ತೀರಿ?

ಅನುವಾದಕರು: ಪ್ರಜ್ಞಾ ಎಲ್. ಎಸ್/ ಪರಿಶೀಲನೆ: ಎಂ.ಜಿ ಹೆಗಡೆ.

ಮೂಲ: *Language and Language Teaching* Volume 4 Number 1 Issue 7 January 2015